ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಬಗ್ಗೆ

ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು):-

298 (322) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅನ್ವಯ 2017-18, 2018-19 ಮತ್ತು 2019-20ರಲ್ಲಿ ಬಿಡುಗಡೆಯಾದ ಅನುದಾನವೆಷ್ಟು; ಕೇಂದ್ರ ಮತ್ತು ರಾಜ್ಯ ಸರ್ಕಾರದ ಪಾಲೆಷ್ಟು; ಬಿಡುಗಡೆಯಾದ ಹಣವೆಷ್ಟು; (ವಿವರ ನೀಡುವುದು)

(ಆ) ಕೇಂದ್ರ ಸರ್ಕಾರ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಅನುದಾನ ಕಡಿಮೆ ನೀಡಿರುವುದರಿಂದ ಈ ಉದ್ಯೋಗ ನಿರ್ವಹಿಸಿದವರಿಗೆ ಹಣ ನೀಡಿಲ್ಲ ಎಂಬ ದೂರುಗಳಿದ್ದು, ಪಾವತಿಸಲು ಬಾಕಿ ಇರುವ ಹಣವೆಷ್ಟು; (ವಿವರ ನೀಡುವುದು) ರಾಜ್ಯಾದ್ಯಂತ ಬಾಕಿ ಇರುವ ಹಣವೆಷ್ಟು; (ವಿವರ ನೀಡುವುದು)

(ಇ) ಉದ್ಯೋಗ ಖಾತರಿ ಯೋಜನೆ ಅನ್ವಯ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳುವ ಅವಕಾಶ ನೀಡಲಾಗಿದೆ; (ವಿವರ ನೀಡುವುದು)

(ಈ) ಈ ಯೋಜನೆ ಅನ್ವಯ ಜಿಲ್ಲೆಯೊಂದರಲ್ಲಿ ಎಷ್ಟು ಮಂದಿಗೆ "ಉದ್ಯೋಗ ಕಾರ್ಡ್" ನೀಡಬೇಕೆಂದು ಷರತ್ತು ಹಾಕಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಉ) ಕಳೆದ 3 ವರ್ಷಗಳಲ್ಲಿ ಬರಪೀಡಿತ ಪ್ರದೇಶಗಳಲ್ಲಿ ಎಷ್ಟು ಹಣವನ್ನು ಈ ಯೋಜನೆ ಅನ್ವಯ ಖರ್ಚು ಮಾಡಲಾಗಿದೆ? (ವಿವರ ನೀಡುವುದು)